CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಫೆಬ್ರವರಿ ೧೦, ೨೦೦೫ (ಮಾಘ ೨೧, ಶಕ ವರ್ಷ ೧೯೨೬) | ಸಂಚಿಕೆ ೬ |
|---|---|---|

## ಭಾಗ - ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಆಕುಕ 472 ಹೆಚ್‌ಎಸ್‌ಹೆಚ್ 2003 ಬೆಂಗಳೂರು, ದಿನಾಂಕ: 13ನೇ ಜನವರಿ 2005**

ವಿಶೇಷ ಆಯ್ಕೆ ಸಮಿತಿಯು ದಿನಾಂಕ: 12.12.2003 ರಂದು ಹೊರಡಿಸಿದ ಅಧಿಸೂಚನೆ ಸಂಖ್ಯೆ: ಡಿಆರ್‌ಸಿ/ 42(1)/2003-04ರ ಪಟ್ಟಿಯಲ್ಲಿ ಆಯ್ಕೆಯಾದ ಪದವೀಧರ ವೈದ್ಯರನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ರೂ. 7400-200-8800-260-10880-320-13120 ಗಳ ವೇತನ ಶ್ರೇಣಿಯಲ್ಲಿ ಎರಡು ವರ್ಷಗಳ ಖಾಯಂ ಪೂರ್ವ ಸೇವಾವಧಿಯ ಮೇರೆಗೆ ಹಂಗಾಮಿಯಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಈ ಅಧಿಸೂಚನೆಗೆ ಲಗತ್ತಿಸಿದ ಅನುಬಂಧದಲ್ಲಿ ಸೂಚಿಸಿರುವಂತೆ ನೇಮಿಸಲಾಗಿದೆ.

1. ಈ ಉದ್ಯೋಗ ನೀಡಿಕೆಯು ಅಭ್ಯರ್ಥಿಯ ವೈದ್ಯಕೀಯ ದೃಢತೆ ಪ್ರಮಾಣ ಪತ್ರ, ಪೂರ್ವಾಪರ ನಡವಳಿಕೆ ಬಗ್ಗೆ ಪೊಲೀಸು ವರದಿ ಮತ್ತು ಜಾತಿ ಹಾಗೂ ಆದಾಯ ಸಿಂಧುತ್ವ ಪ್ರಮಾಣ ಪತ್ರ ತನಿಖೆಗೆ ಒಳಪಟ್ಟಿರುತ್ತದೆ.

2. ನೇಮಕಾತಿ ಹೊಂದಿದ ಅಭ್ಯರ್ಥಿಯು ಎರಡು ವರ್ಷಗಳ ಕಾಲ ಖಾಯಂ ಪೂರ್ವ ಸೇವಾವಧಿಯಲ್ಲಿ ಹುದ್ದೆಗೆ ನಿಗದಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು.

3. ಈ ಅಧಿಸೂಚನೆ ತಲುಪಿದ ತಕ್ಷಣ ಅಥವಾ ಈ ಅಧಿಸೂಚನೆಯನ್ನು ನೋಂದಣಿ ಅಂಚೆಯಲ್ಲಿ ಕಳುಹಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಅಭ್ಯರ್ಥಿಯು ನೇಮಕಾತಿ ಮಾಡಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗಬೇಕು. ಹಾಜರಾಗದಿದ್ದಲ್ಲಿ ನೇಮಕಾತಿಯು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 18(3) ರನ್ವಯ ಯಾವುದೇ ಸೂಚನೆ ಇಲ್ಲದೆ ರದ್ದಾಗುವುದು.

4. ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗುವಾಗ ಎಲ್ಲಾ ಮೂಲ ದಾಖಲೆಗಳನ್ನು ಅಂದರೆ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಗೊತ್ತುಪಡಿಸಿರುವ ವಿದ್ಯಾರ್ಹತೆಯ ಪ್ರಮಾಣ ಪತ್ರ, ಜನ್ಮ ದಿನಾಂಕದ ದಾಖಲೆ ಇತ್ಯಾದಿಗಳನ್ನು ಆಯಾ ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಅಧಿಕಾರಿ: ಜಿಲ್ಲಾ ಸರ್ಜನ್‌ಗಳ ಮುಂದೆ ಹಾಜರುಪಡಿಸಿ, ಅವರಿಂದ ಚಲನಾದೇಶವನ್ನು ಪಡೆದು ನೇಮಿಸಿರುವ ಸ್ಥಳದಲ್ಲಿ ಕೆಲಸಕ್ಕೆ ಹಾಜರಾಗತಕ್ಕದ್ದು.

5. ಕ್ರಮ ಸಂಖ್ಯೆ: 1 ರಿಂದ 5 ರಲ್ಲಿನ ಎಲ್ಲಾ ಅಭ್ಯರ್ಥಿಗಳು ಮೀಸಲಾತಿ ಆಧಾರದಲ್ಲಿ ಆಯ್ಕೆಯಾಗಿದ್ದು ಅವರುಗಳಿಗೆ ಸಂಬಂಧಿಸಿದಂತೆ ಸಿಂಧುತ್ವ ಪ್ರಮಾಣ ಪತ್ರವು ಸರ್ಕಾರಕ್ಕೆ ಸಕಾಲದಲ್ಲಿ ತಲುಪದಿರುವುದರಿಂದ ಸದರಿ ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಸಂಬಂಧಪಟ್ಟ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಮುಂದೆ ತಮ್ಮ ಆಯ್ಕೆಗೆ ಸಂಬಂಧಪಟ್ಟಂತೆ ಸಿಂಧುತ್ವ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಲ್ಲಿಸತಕ್ಕದ್ದು, ಇಲ್ಲದಿದ್ದಲ್ಲಿ ನೇಮಕಾತಿ ಆದೇಶವು ರದ್ದುಗೊಳ್ಳುತ್ತದೆ.

6. ಅಭ್ಯರ್ಥಿಯು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡವಳಿಕೆ ಪ್ರಮಾಣ ಪತ್ರವನ್ನು ಪಡೆದು ಕೆಲಸಕ್ಕೆ ಹಾಜರಾಗುವ ಸಮಯದಲ್ಲಿ ಹಾಜರುಪಡಿಸಬೇಕು.

7. ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿರುವ ಅಭ್ಯರ್ಥಿಗಳಿಗೆ ಸ್ನಾತಕೋತ್ತರ ವ್ಯಾಸಂಗವನ್ನು ಮುಂದುವರಿಸಲು ಅವಕಾಶವಿರುವುದಿಲ್ಲ.

ಅಭ್ಯರ್ಥಿಯ ಜೇಷ್ಠತೆಯು ವಿಶೇಷ ಆಯ್ಕೆ ಸಮಿತಿಯು ನೀಡಿರುವ ಆಯ್ಕೆ ಪಟ್ಟಿಯ ಕ್ರಮಾಂಕದಂತೆ ಇರುತ್ತದೆ.

ನೇಮಕಾತಿ ಮಾಡಿರುವ ಸ್ಥಳದ ಮಾರ್ಪಾಡಿಗಾಗಿ ಅಥವಾ ರದ್ದತಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.

ನೇಮಕಾತಿ ಮಾಡಿರುವ ಸ್ಥಳದಲ್ಲಿ ಯಾವುದೇ ಕಾರಣಕ್ಕಾಗಲೀ ಹುದ್ದೆ ಖಾಲಿ ಇಲ್ಲದಿದ್ದ ಪಕ್ಷದಲ್ಲಿ ಸದರಿ ಅಭ್ಯರ್ಥಿಗಳನ್ನು ನೇಮಕಾತಿ ಮಾಡಿರುವ ಜಿಲ್ಲೆಯ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ

ಅಧಿಕಾರಿಯವರೊಂದಿಗೆ ಸಮಾಲೋಚಿಸಿ, ಆ ಜಿಲ್ಲೆಯಲ್ಲಿಯೇ ಖಾಲಿ ಇರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಬದಲಿ ನೇಮಕಾತಿ ಆದೇಶ ನೀಡಲು ಅಧಿಕಾರ ನೀಡಲಾಗಿದೆ. ಇಂತಹ ಪ್ರಕರಣಗಳಲ್ಲಿ ಕೈಗೊಂಡ ಕ್ರಮದ ಕುರಿತು ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಎಸ್. ಜಗದೀಶಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 472 ಹೆಚ್‌ಎಸ್‌ಹೆಚ್ 2003 ದಿನಾಂಕ: 13ನೇ ಜನವರಿ 2005ಕ್ಕೆ**

**ಅನುಬಂಧ**

| ಕ್ರ.ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಮೀಸಲಾತಿ ವರ್ಗ | ಜನ್ಮ ದಿನಾಂಕ | ನೇಮಕಾತಿ ಮಾಡಿರುವ ಸ್ಥಳ |
|---|---|---|---|---|
| 1. | ಡಾ: ಮಲ್ಲಿಕಾರ್ಜುನ ಎಂ. ಪ್ರಾಆಕೇಂದ್ರ, ಕಾಟೇನಹಳ್ಳಿ ಹಾವೇರಿ ತಾಲ್ಲೂಕು: ಜಿಲ್ಲೆ | ಎಸ್‌ಟಿ (ಜಿ) | 22.06.1969 | ಪ್ರಾಆಕೇಂದ್ರ, ಕಾಟೇನಹಳ್ಳಿ ಹಾವೇರಿ ತಾಲ್ಲೂಕು ಹಾವೇರಿ ಜಿಲ್ಲೆ |
| 2. | ಡಾ: ಸುಧಾರಾಣಿ ಎಸ್. ವಿ. ಪ್ರಾಆಕೇಂದ್ರ, ಗೋಪಾಲಪುರ ಬೆಂಗಳೂರು ನಗರ ಜಿಲ್ಲೆ | III (ಬಿ)(ಎಫ್) | 16.07.1969 | ಪ್ರಾಆಕೇಂದ್ರ, ಗೋಪಾಲಪುರ ಬೆಂಗಳೂರು ನಗರ ಜಿಲ್ಲೆ |
| 3. | ಡಾ: ಸುಶೀಲಾ ಇ. ಪ್ರಾಆಕೇಂದ್ರ, ಎಲೆರಾಂಪುರ ಕೊರಟಗೆರೆ ತಾಲ್ಲೂಕು ತುಮಕೂರು ಜಿಲ್ಲೆ | III (ಎ) (ಎಫ್) | 22.07.1974 | ಪ್ರಾಆಕೇಂದ್ರ, ಎಲೆರಾಂಪುರ ಕೊರಟಗೆರೆ ತಾಲ್ಲೂಕು ತುಮಕೂರು ಜಿಲ್ಲೆ. |
| 4. | ಡಾ: ಮಂಗಳಾ ಎನ್. ಸಿರ್ಸೀಕರ್ ಪತಿ: ಡಾ: ಸತೀಶ್‌ಕುಮಾರ್ 116/8,10ನೇ ಅಡ್ಡರಸ್ತೆ 5ನೇ ಮುಖ್ಯ ರಸ್ತೆ ಬಸಪ್ಪ ಬಡಾವಣೆ, ಗವಿಪುರಂ ವಿಸ್ತರಣೆ ಬೆಂಗಳೂರು-19 | I (ಜಿ) | 11.12.1973 | ಸಾರ್ವಜನಿಕ ಆಸ್ಪತ್ರೆ ಪಾವಗಡ ತುಮಕೂರು ಜಿಲ್ಲೆ. |

**ಸಿ. ಎಸ್. ಜಗದೀಶಯ್ಯ**
ಪಿ.ಆರ್. 141 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## PERSONNEL AND ADMINISTRATIVE REFORMS SECRETARIAT
## NOTIFICATION
**No. DPAR 119 SPS 2004, Bangalore, Dated: 17th January 2005**

The following IPS officers of 1992 batch borne on Karnataka Cadre are promoted to officiate in the Selection Grade of IPS viz., Rs. 14300-400-18300 with effect from 01.01.2005.

| Sl.No. | Name of the Officer and present post held | Reference to the vacancy against which promotion is accorded |
|---|---|---|
| 1 | Shri Prashanth Kumar Thakur, Superintendent of Police, Bangalore District, Bangalore. | Promoted in regular line in the cadre post of Superintendent of Police, Bangalore District, Bangalore. |
| 2. | Shri Suresh Kunhi Mohamed, on study leave | He is accorded proforma promotion to the Selection Grade of IPS with reference to promotion of his junior Sri ASN Murthy, IPS. |
| 3. | Shri A.S.N. Murthy, Superintendent of Police, Railways, Bangalore. | Promoted in regular line in the cadre post of Superintendent of Police, Railways, Bangalore. |

By Order and in the name of the Governor of Karnataka,
PR-140 **K. SUDHAKARA SHETTY**
Under Secretary to Government, DPAR (Services-1).

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಆಕುಕ 107 ಎಂಎಂಸಿ 2004 ಬೆಂಗಳೂರು, ದಿನಾಂಕ: 18ನೇ ಜನವರಿ 2005**

ದಿನಾಂಕ: 5.10.2004 ಸಂಖ್ಯೆ: ಆಕುಕ 107 ಎಂಎಂಸಿ 2004ರ ಅಧಿಸೂಚನೆಯಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯ ಬೆಂಗಳೂರು ವೈದ್ಯಕೀಯ ಕಾಲೇಜಿನ ಮತ್ತು ಮೈಸೂರು ವೈದ್ಯಕೀಯ ಕಾಲೇಜಿನ ವೈದ್ಯಶಾಸ್ತ್ರ ಸಹಾಯಕ ಪ್ರಾಧ್ಯಾಪಕರುಗಳಿಗೆ ಪೂರ್ವಾನ್ವಯ ಬಡ್ತಿಯನ್ನು ನೀಡಲಾಗಿದ್ದು ಆ ಪೈಕಿ 7ನೇ ಕ್ರಮಸಂಖ್ಯೆಯಲ್ಲಿರುವ ಡಾ: ಟಿ. ಡಿ. ಜಯಶಂಕರ್ ರವರ ಹೆಸರನ್ನು ಡಾ: ಬಿ. ಬಿ. ಜಯಶಂಕರ ಎಂದು ಪುನರ್‌ಪ್ರತಿಸ್ಥಾಪಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್.142 **ಎಸ್. ನಾಗರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ).

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ವಾಕೈ 85 ಕೈಸೇವಿ 2004 ಬೆಂಗಳೂರು, ದಿನಾಂಕ: 24ನೇ ಜನವರಿ 2005**

ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಈ ಕೆಳಕಂಡ ಜಂಟಿ ನಿರ್ದೇಶಕರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರ ಹೆಸರುಗಳ ಮುಂದೆ ಸೂಚಿಸಿರುವ ಹುದ್ದೆ ಮತ್ತು ಸ್ಥಳಗಳಿಗೆ ವರ್ಗಾಯಿಸಿ ನೇಮಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು, ಹುದ್ದೆ ಮತ್ತು ಸ್ಥಳ | ವರ್ಗಾಯಿಸಿದ ಸ್ಥಳ ಮತ್ತು ಹುದ್ದೆ |
|---|---|---|
| 1. | ಶ್ರೀ ಆರ್. ಐ. ಕುಂಬಾರ್ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬಾಗಲಕೋಟೆ. | ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ ಧಾರವಾಡ (ಶ್ರೀ ಜೀವಣ್ಣನವರ್, ಇವರ ಸ್ಥಾನದಲ್ಲಿ) |
| 2. | ಶ್ರೀ ಜೀವಣ್ಣನವರ್, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಧಾರವಾಡ. | ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ ಬಾಗಲಕೋಟೆ (ಶ್ರೀ ಆರ್.ಐ. ಕುಂಬಾರ್ ಇವರ ಸ್ಥಾನದಲ್ಲಿ) |
| 3. | ಶ್ರೀ ಎನ್. ಎಸ್. ಚಂದ್ರಶೇಖರ್ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಚಿಕ್ಕಮಗಳೂರು | ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ ಚಾಮರಾಜನಗರ (ಶ್ರೀ ಕೆ.ಪಿ. ಪರಮೇಶ್ವರಪ್ಪ ಇವರ ಸ್ಥಾನದಲ್ಲಿ) |
| 4. | ಶ್ರೀ ಕೆ.ಪಿ. ಪರಮೇಶ್ವರಪ್ಪ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಚಾಮರಾಜನಗರ | ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ ಚಿಕ್ಕಮಗಳೂರು (ಶ್ರೀ ಎನ್.ಎಸ್. ಚಂದ್ರಶೇಖರ್, ಇವರ ಸ್ಥಾನದಲ್ಲಿ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.143

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಿಆಸುಇ 15 ಆಸೇವ 2005 ಬೆಂಗಳೂರು, ದಿನಾಂಕ: 28ನೇ ಜನವರಿ 2005**

ಕರ್ನಾಟಕ ಆಡಳಿತ ಸೇವೆಯ (ಆಯ್ಕೆ ಶ್ರೇಣಿ) ವೃಂದಕ್ಕೆ ಸೇರಿದ ಶ್ರೀ ಎಸ್. ಹೆಚ್. ಕುದ್ರಿಮೋತಿ ಮುಖ್ಯ ಆಡಳಿತಾಧಿಕಾರಿ ಕಿದ್ವಾಯಿ ಸ್ಮಾರಕ ಗಂಥಿ ಸಂಸ್ಥೆ ಬೆಂಗಳೂರು ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ಸದಸ್ಯ ಕಾರ್ಯದರ್ಶಿ, ರಾಜ್ಯ ಯೋಜನಾ ಮಂಡಳಿ ಬೆಂಗಳೂರು ಖಾಲಿ ಹುದ್ದೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.144

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-2).

**ಅಧಿಸೂಚನೆ ಸಂಖ್ಯೆ: ಸಿಆಸುಇ 2 ಆಸೇವ 2005 ಬೆಂಗಳೂರು, ದಿನಾಂಕ: 28ನೇ ಜನವರಿ 2005**

ಕರ್ನಾಟಕ ಆಡಳಿತ ಸೇವೆಯ (ಕಿರಿಯ ಶ್ರೇಣಿ) ವೃಂದಕ್ಕೆ ಸೇರಿದ ಶ್ರೀ ಎ. ಆರ್. ಪಾಂಡುರಂಗ ವಿಶೇಷ ಭೂಸ್ವಾಧೀನಾಧಿಕಾರಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಬೆಂಗಳೂರು ಇವರ ಸೇವೆಯನ್ನು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಿಂದ ಹಿಂದಕ್ಕೆ ಪಡೆದು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಅನೌಪಚಾರಿಕ ಪಡಿತರ ಪ್ರದೇಶ ಉತ್ತರ ವಲಯ ಬೆಂಗಳೂರು, ಹುದ್ದೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.145

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ, (ಸೇವೆಗಳು-2).

**ಅಧಿಸೂಚನೆ ಸಂಖ್ಯೆ: ಸಿಆಸುಇ 42 ಆಸೇಇ 2005 ಬೆಂಗಳೂರು, ದಿನಾಂಕ: 29ನೇ ಜನವರಿ 2005**

ದಿವಂಗತ ಶ್ರೀ ಎಂ. ಸಿ. ನಟರಾಜು, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಇವರು ದಿನಾಂಕ: 18.05.97 ರಿಂದ 29.06.97 ರವರೆಗೆ ಕಳೆದ ಅವಧಿಯನ್ನು ಈ ಕೆಳಕಂಡಂತೆ ಸಕ್ರಮಗೊಳಿಸಿ ಆದೇಶಿಸಿದೆ.

| | | |
|---|---|---|
| I | 18.05.1997 ರಿಂದ 16.06.1997 ರವರೆಗೆ | ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 114 ರಡಿ ಪರಿವರ್ತಿತ ರಜೆ. |
| II | 17.06.1997 ರಿಂದ 27.06.1997 ರವರೆಗೆ | ಕರ್ನಾಟಕ ನಾಗರೀಕ ಸೇವಾ ನಿಯಮ 8(15) (ಎಫ್)ರ ಪ್ರಕಾರ ಕಡ್ಡಾಯ ನೇಮಕಾತಿ ನಿರೀಕ್ಷಣಾ ಅವಧಿ. |
| III | 28.06.1997 ರಿಂದ 29.06.1997 ರವರೆಗೆ | ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 76ರನ್ವಯ ಸೇರುವಿಕೆ ಕಾಲ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.146

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ, (ಸೇವೆಗಳು-2).

**ಅಧಿಸೂಚನೆ ಸಂಖ್ಯೆ: ಸಿಆಸುಇ 395 ಸಅಸೇ 2004 ಬೆಂಗಳೂರು, ದಿನಾಂಕ: 27ನೇ ಜನವರಿ 2005**

ಶ್ರೀ ಗುರುದಾಸ್ ಎಂ. ಭಟ್, ಉಪ ಕಾರ್ಮಿಕ ಆಯುಕ್ತರು, ಬೆಂಗಳೂರು (ಪ್ರಾದೇಶಿಕ-1) ಹಾಗೂ ಶ್ರೀ ಟಿ. ಆರ್. ರಮೇಶ್, ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ-2, ಬೆಂಗಳೂರು ಇವರು ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಕರ್ನಾಟಕ ಸರ್ಕಾರ ಸಚಿವಾಲಯದ ಕಾರ್ಮಿಕ ಇಲಾಖೆಯಲ್ಲಿಯ ಬಾಲ ಕಾರ್ಮಿಕ ಕೋಶದಲ್ಲಿನ ವಿಶೇಷಾಧಿಕಾರಿ ಮತ್ತು ಉಪ ವಿಶೇಷಾಧಿಕಾರಿ ಎಂಬ ಎರಡು ವೇತನ ಶ್ರೇಣಿ ರಹಿತ ಹುದ್ದೆಗಳನ್ನು ಆದೇಶ ಸಂಖ್ಯೆ: ಸಿಆಸುಇ 19 ಸಸಿವಿ 2004, ದಿನಾಂಕ: 19.11.2004 ರಲ್ಲಿ ಸಚಿವಾಲಯದ ಕ್ರಮಬದ್ಧ ಹುದ್ದೆಗಳೆಂದು ಪರಿಗಣಿಸಿರುವುದರಿಂದ ದಿನಾಂಕ: 19.11.2004 ರಿಂದ ಜಾರಿಗೆ ಬರುವಂತೆ ಶ್ರೀ ಗುರುದಾಸ್ ಎಂ. ಭಟ್ ಮತ್ತು ಶ್ರೀ ಟಿ. ಆರ್. ರಮೇಶ್ ರವರನ್ನು ಕಾರ್ಮಿಕ ಇಲಾಖೆಯ ಬಾಲ ಕಾರ್ಮಿಕ ಕೋಶದಲ್ಲಿ ಕ್ರಮವಾಗಿ ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಹಾಗೂ ಉಪ ವಿಶೇಷಾಧಿಕಾರಿಯಾಗಿ ನಿಯೋಜನೆ ಮೇಲೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.147

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ, (ಸೇವೆಗಳು-2).

**ಶಿಕ್ಷಣ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಇಡಿ 335 ಡಿಪಿಐ 2003 ಬೆಂಗಳೂರು-1 ದಿನಾಂಕ: 25ನೇ ಜನವರಿ 2005**

ಸಾರ್ವಜನಿಕ ಶಿಕ್ಷಣ ಇಲಾಖೆಯ ಶ್ರೀ ಡಿ. ವೆಂಕಟೇಶಯ್ಯ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರಿಗೆ ದಿನಾಂಕ: 19.08.2002 ರಿಂದ ಪೂರ್ವಾನ್ವಯವಾಗಿ ಉಪ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಪದೋನ್ನತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.148

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಿಆಸುಇ 379 ಸಅಸೇ 2004 ಬೆಂಗಳೂರು, ದಿನಾಂಕ: 29ನೇ ಜನವರಿ 2005**

ಡಾ: ಎ. ಆರ್. ಮಂಜುನಾಥ್ ಸಾರ್ವಜನಿಕ ಸಂಪರ್ಕಾಧಿಕಾರಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಇವರನ್ನು ವಿಜ್ಞಾನ, ತಂತ್ರಜ್ಞಾನ ಹಾಗೂ ಸಣ್ಣ ಉಳಿತಾಯ ಸಚಿವರ ಆಪ್ತ ಕಾರ್ಯದರ್ಶಿ ಹುದ್ದೆಗೆ ನೇಮಿಸುವ ಸಲುವಾಗಿ ಇವರ ಸೇವೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆಯ ವಶಕ್ಕೆ ನೀಡಿರುವುದರಿಂದ ಸದರಿ ಅಧಿಕಾರಿಯವರನ್ನು ದಿನಾಂಕ: 16.12.2004 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಥವಾ ವಿಜ್ಞಾನ, ತಂತ್ರಜ್ಞಾನ ಹಾಗೂ ಸಣ್ಣ ಉಳಿತಾಯ ಸಚಿವರ ಪದಾವಧಿಯವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರಿಗೆ ಸಚಿವರ ಆಪ್ತ ಕಾರ್ಯದರ್ಶಿ ಹುದ್ದೆಯಲ್ಲಿ ಮರುಸ್ಥಳ ನಿಯುಕ್ತಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.149

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ಶಿಕ್ಷಣ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಇಡಿ 185 ಡಿಪಿಐ 2004 ಬೆಂಗಳೂರು, ದಿನಾಂಕ: 18ನೇ ಜನವರಿ 2005**

ದಿನಾಂಕ: 11.09.2003ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 406 ಡಿಪಿಐ 2003 ರಲ್ಲಿ ಶ್ರೀ ಕೆ. ಎನ್. ಶ್ರೀನಿವಾಸಲು ಇವರಿಗೆ ಉಪನಿರ್ದೇಶಕರ ಹುದ್ದೆಗೆ ಪದೋನ್ನತಿ ನೀಡಿ ಹಾವೇರಿ ಜಿಲ್ಲೆ ಇಲ್ಲಿಗೆ ಸ್ಥಳ ನಿಯುಕ್ತಿಗೊಳಿಸಲಾಗಿತ್ತು. ತದನಂತರ ಇವರ ಸ್ಥಳ ನಿಯುಕ್ತಿ ಆದೇಶವನ್ನು ದಿನಾಂಕ: 28.11.2003ರ ಅಧಿಸೂಚನೆ ಸಂಖ್ಯೆ: ಇಡಿ 406 ಡಿಪಿಐ 2003ರಲ್ಲಿ ಮಾರ್ಪಡಿಸಿ, ಗ್ರಾಮೀಣಾ ನೀರು ಸರಬರಾಜು ಸಚಿವರ ಆಪ್ತ ಕಾರ್ಯದರ್ಶಿಯಾಗಿ ಮುಂದುವರೆಸಿ ಆದೇಶಿಸಿದೆ. ಆದ್ದರಿಂದ ಸದರಿಯವರಿಗಿಂತ ಜೇಷ್ಠತೆಯಲ್ಲಿ ಕಿರಿಯವರಾದ ಶ್ರೀ ಡಿ. ಬಿ. ಕೃಷ್ಣಪ್ಪನವರ ಇವರು ಪದೋನ್ನತಿ ಹೊಂದಿ ಕರ್ತವ್ಯಕ್ಕೆ ಹಾಜರಾದ ದಿನಾಂಕ: 16.10.2003 ರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 60 ರಡಿ ನಿದರ್ಶನಾತ್ಮಕ ಸ್ಥಾನಪನ್ನ ಪದೋನ್ನತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.150

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಿಆಸುಇ 13 ಆಸೇವ 2005 ಬೆಂಗಳೂರು, ದಿನಾಂಕ: 20ನೇ ಜನವರಿ 2005**

ವಿಶೇಷ ಭೂಸ್ವಾಧೀನಾಧಿಕಾರಿ, ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರು ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಶ್ರೀ ಅಬ್ದುಲ್ ರಹೀಂ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವಿಶೇಷ ಭೂಸ್ವಾಧೀನಾಧಿಕಾರಿ, ಕರ್ನಾಟಕ ರಾಜ್ಯ ಹೆದ್ದಾರಿಗಳ ಅಭಿವೃದ್ಧಿ ಯೋಜನೆ, ಬೆಂಗಳೂರು ಹುದ್ದೆಯ ಸಮವರ್ತಿ ಪ್ರಭಾರದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಗಳು 66ರ ಮೇರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.151

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ಅಧಿಸೂಚನೆ ಸಂಖ್ಯೆ: ಸಿಆಸುಇ 180 ಸಆಸೇ 2004 ಬೆಂಗಳೂರು, ದಿನಾಂಕ: 1ನೇ ಫೆಬ್ರವರಿ 2005**

ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗೆ ಸೇರಿರುವ ಶ್ರೀಮತಿ ಕೆ. ಎನ್. ಗಾಯತ್ರಿ ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರೂ. 10620-14960ರ ವೇತನ ಶ್ರೇಣಿಯ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯಲ್ಲಿ ಸ್ಥಾನಪನ್ನ ಬಡ್ತಿ ನೀಡಿ ಸರ್ಕಾರದ ಉಪ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಶ್ರೀ ಪಿ. ಪಿ. ತೇರದಾಳ್, ಇವರ ನಿವೃತ್ತಿಯಿಂದ ತೆರವಾದ ಸ್ಥಾನದಲ್ಲಿ ನೇಮಿಸಿದೆ ಈ ಅಧಿಕಾರಿಯು ಬಡ್ತಿ ಹೊಂದಿದ ಹುದ್ದೆಯಲ್ಲಿ ಒಂದು ವಾರದೊಳಗೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.152

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ಅಧಿಸೂಚನೆ ಸಂಖ್ಯೆ: ಸಿಆಸುಇ 34 ಸಆರ 2005 ಬೆಂಗಳೂರು, ದಿನಾಂಕ: 31ನೇ ಜನವರಿ 2005**

ಆರ್ಥಿಕ (ಸೇವೆಗಳು-1) ಇಲಾಖೆಯ ಸರ್ಕಾರದ ಉಪ ಕಾರ್ಯದರ್ಶಿ ಶ್ರೀ ಎಂ. ಎನ್. ಈರೇಗೌಡ ಇವರಿಗೆ 31 ದಿನಗಳ ಪರಿವರ್ತಿತ ರಜೆಯನ್ನು ದಿನಾಂಕ: 20.1.2005 ರಿಂದ 19.2.2005 ರವರೆಗೆ (ಉ.ದಿ.ಸೇ) ಮಂಜೂರು ಮಾಡಲಾಗಿದೆ. ರಜೆಯು ಮುಗಿದ ನಂತರ ಅಧಿಕಾರಿಯವರನ್ನು ಅದೇ ಹುದ್ದೆಯಲ್ಲಿ ಮುಂದುವರೆಸಲಾಗಿದೆ. ಈ ರಜೆಯನ್ನು ಮಂಜೂರು ಮಾಡಿದ ನಂತರ ಖಾತೆಯಲ್ಲಿ 101 ದಿನಗಳು ಅರ್ಧ ವೇತನ ರಜೆ ಜಮೆ ಇರುತ್ತದೆ.

ಮೇಲ್ಕಂಡ ರಜೆ ಅವಧಿಯಲ್ಲಿ ಅದೇ ಇಲಾಖೆಯ ಅಧೀನ ಕಾರ್ಯದರ್ಶಿ ಶ್ರೀ ಕೆ.ಎಸ್. ಗೋಪಾಲಕೃಷ್ಣ ರವರನ್ನು ಪ್ರಭಾರದ ಮೇಲೆ ಮೇಲ್ಕಂಡ ಹುದ್ದೆಯಲ್ಲಿ ಅಧಿಕ ಪ್ರಭಾರದಲ್ಲಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.153

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ಕಂದಾಯ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಕಂಇ 151 ಮುಸೇವಿ 2004 ಬೆಂಗಳೂರು, ದಿನಾಂಕ: 22ನೇ ಜನವರಿ 2005**

ಧಾರ್ಮಿಕದತ್ತಿ ಇಲಾಖೆಯಲ್ಲಿ ಗ್ರೂಪ್ ಬಿ ಅಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುತ್ತಿರುವ ಈ ಕೆಳಗೆ ನಮೂದಿಸಿರುವ ಅಧಿಕಾರಿಗಳಿಗೆ ಗ್ರೂಪ್ ಎ (ಕಿರಿಯ ಶ್ರೇಣಿ) ಅಧಿಕಾರಿಯ ವೇತನ ಶ್ರೇಣಿ ರೂ. 7400-13120ಗೆ ಬಡ್ತಿ ನೀಡಿ ಅವರುಗಳ ಹೆಸರುಗಳ ಮುಂದೆ ಸೂಚಿಸಿರುವ ಸ್ಥಳಗಳಿಗೆ ನಿಯುಕ್ತಿಗೊಳಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ಬಡ್ತಿಯ ಮೇಲೆ ನೇಮಿಸಲಾದ ಸ್ಥಳ |
|---|---|---|
| 1 | ಶ್ರೀಮತಿ ಬಿ. ಪುಷ್ಪಲತಾ, ಕಾರ್ಯನಿರ್ವಾಹಕ ಅಧಿಕಾರಿ, ಶ್ರೀ ಅನಂತ ಪದ್ಮನಾಭ ದೇವಸ್ಥಾನ, ಕುಡುಪು, ಮಂಗಳೂರು ತಾಲ್ಲೂಕು | ಕಾರ್ಯನಿರ್ವಾಹಕ ಅಧಿಕಾರಿಗಳು, ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನ, ಕಟೀಲು ಮಂಗಳೂರು ತಾಲ್ಲೂಕು, (ಹೊಸದಾಗಿ ಸೃಜಿಸಿರುವ ಹುದ್ದೆ) |
| 2 | ಶ್ರೀ ಹೆಚ್. ಎಂ. ಕಾಳಿ, (ನಿಯಮ 32ರ ಮೇರೆಗೆ ಗ್ರೂಪ್ ಎ ಅಧಿಕಾರಿ) ಕಾರ್ಯನಿರ್ವಾಹಕ ಅಧಿಕಾರಿ, ಶ್ರೀ ಶ್ರೀಕಂಠೇಶ್ವರಸ್ವಾಮಿ ದೇವಸ್ಥಾನ, ನಂಜನಗೂಡು | ಕಾರ್ಯನಿರ್ವಾಹಕ ಅಧಿಕಾರಿಗಳು, ಶ್ರೀ ಶ್ರೀಕಂಠೇಶ್ವರಸ್ವಾಮಿ ದೇವಸ್ಥಾನ, ನಂಜನಗೂಡು |
| 3 | ಶ್ರೀಮತಿ ಎಸ್. ಟಿ. ಸುಧಾ ಮುಜರಾಯಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಕಾರ್ಯನಿರ್ವಾಹಕ ಅಧಿಕಾರಿ, ಶ್ರೀ ಮೂಕಾಂಬಿಕಾ ದೇವಸ್ಥಾನ, ಕೊಲ್ಲೂರು, ಕುಂದಾಪುರ ತಾಲ್ಲೂಕು ಉಡುಪಿ ಜಿಲ್ಲೆ. |
| 4 | ಶ್ರೀ ಶ್ರೀನಿವಾಸ್ ಮುಜರಾಯಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಮಂಡ್ಯ | ವಿಶೇಷಾಧಿಕಾರಿಗಳು, ಕರ್ನಾಟಕ ರಾಜ್ಯ ಛತ್ರ, ತಿರುಮಲ ತಿರುಪತಿ |

ಮೇಲ್ಕಂಡ ಅಧಿಕಾರಿಗಳು ಅವರ ಕರ್ತವ್ಯ ನಿರ್ವಹಿಸುತ್ತಿರುವ ಹುದ್ದೆಯಿಂದ ಬಿಡುಗಡೆಹೊಂದಿ ನೇಮಕಾತಿ ಮಾಡಲ್ಪಟ್ಟ ಹೊಸ ಹುದ್ದೆಗಳಿಗೆ ಕಾರ್ಯ ವರದಿ ಮಾಡಿಕೊಂಡು ಸರ್ಕಾರಕ್ಕೆ ಮಾಹಿತಿ ಸಲ್ಲಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.155

**ರಮೇಶ್ ಕೆ. ಜಾಗೀರ್‌ದಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಮುಜರಾಯಿ).

**ಅಧಿಸೂಚನೆ ಸಂಖ್ಯೆ: ಕಂಇ 32 ಭೂದಾಸೇ (1) 2004 ಬೆಂಗಳೂರು, ದಿನಾಂಕ: 25ನೇ ಜನವರಿ 2005**

ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ ಶ್ರೀ ಕೆ. ವಿಶ್ವನಾಥರೆಡ್ಡಿ, ಭೂದಾಖಲೆಗಳ ಜಂಟಿ ನಿರ್ದೇಶಕರು, ಗುಲ್ಬರ್ಗ ವಿಭಾಗ, ಗುಲ್ಬರ್ಗ ಇವರನ್ನು, ಸರ್ಕಾರಿ ಆದೇಶ ಸಂಖ್ಯೆ: ಕಂಇ 198 ಮುಸೇವಿ 2004 ದಿನಾಂಕ: 28.10.2004 ರನ್ವಯ ಧಾರ್ಮಿಕ ದತ್ತಿ ಇಲಾಖೆಯಲ್ಲಿ ವೇತನ ಶ್ರೇಣಿ ರೂ. 10620-14960 ರಲ್ಲಿ ಹೊಸದಾಗಿ ಸೃಜಿಸಲಾಗಿರುವ ಜಂಟಿ ನಿರ್ದೇಶಕರ ಹುದ್ದೆಗೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಿಯೋಜನೆಯ ಮೇಲೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.156

**ಕೆ. ವಿ. ಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಭೂಮಾಪನ).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಆಕುಕ 68 ಎಂಎಸ್‌ಎಸ್ 2005 ಬೆಂಗಳೂರು, ದಿನಾಂಕ: 24ನೇ ಜನವರಿ 2005

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಡಾ: ಪಾರ್ವತಿ ವಿ. ನಗರಾಳ್, ಯೋಜನಾ ನಿರ್ದೇಶಕರು (ಆರ್‌ಸಿಹೆಚ್), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ಡಾ: ಬಿ. ವಿದ್ಯಾಮಣಿ ಇವರ ವಯೋ ನಿವೃತ್ತಿಯಿಂದ ದಿನಾಂಕ: 31.1.2005 (ಅಪರಾಹ್ನ) ರಂದು ತೆರವಾಗಲಿರುವ ಅಪರ ನಿರ್ದೇಶಕರು (ಸಿಎಂಡಿ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ ಈ ಹುದ್ದೆಗೆ ವರ್ಗಾಯಿಸಿ ನೇಮಿಸಿದೆ. ಮುಂದುವರೆದು, ಡಾ: ಪಾರ್ವತಿ ವಿ. ನಗರಾಳ್ ಇವರನ್ನು ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಈ ಹುದ್ದೆಗೆ ದಿನಾಂಕ: 1.2.2005 ರಿಂದ ಜಾರಿಗೆ ಬರುವಂತೆ ಹೆಚ್ಚಿನ ಪ್ರಭಾರದಲ್ಲಿರಿಸಿ ಆದೇಶಿಸಿದೆ.

ಡಾ: ಎಂ. ಜಿ. ಪ್ರಸಾದ್, ಸಹನಿರ್ದೇಶಕರು (ಆರ್‌ಸಿಹೆಚ್) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರಿಗೆ ದಿನಾಂಕ: 1.2.2005 ರಿಂದ ಜಾರಿಗೆ ಬರುವಂತೆ ಯೋಜನಾ ನಿರ್ದೇಶಕರು (ಆರ್‌ಸಿಹೆಚ್) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಈ ಹುದ್ದೆಗೆ ಹೆಚ್ಚಿನ ಪ್ರಭಾರದಲ್ಲಿರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.158

**ಸಿ. ಎಸ್. ಜಗದೀಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಸಿಆಸುಇ 22 ಸಆಸೇ 2005(2) ಬೆಂಗಳೂರು, ದಿನಾಂಕ: 17ನೇ ಜನವರಿ 2005

ಶ್ರೀ ಮೂಸೆ ಕುನ್ನಿ ನಾಯರ್ ಮೂಲೆ, ಜಿಲ್ಲಾ ನ್ಯಾಯಾಧೀಶರು ಪ್ರಸ್ತುತ ಕರ್ನಾಟಕ ಉಚ್ಚ ನ್ಯಾಯಾಲಯ ಮುಖ್ಯ ನ್ಯಾಯಾಧೀಶರ ಕಾರ್ಯದರ್ಶಿಗಳು, ಬೆಂಗಳೂರು ಇವರನ್ನು ಕರ್ನಾಟಕ ಉಚ್ಚ ನ್ಯಾಯಾಲಯ ಅಧಿಸೂಚನೆ ಸಂಖ್ಯೆ: ಜಿಓಬಿ (1)1/2005, ದಿನಾಂಕ: 12.1.2005 ರಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಕಾನೂನು ಇಲಾಖೆಯ ಅಪರ ಕಾರ್ಯದರ್ಶಿ ಹುದ್ದೆಗೆ ನೇಮಿಸಿರುವನ್ವಯ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 22 ಸಆಸೇ 2005 (1), ದಿನಾಂಕ: 17.1.2005ರಲ್ಲಿ ವೇತನ ಶ್ರೇಣಿ ರೂ. 13820-17220ರಕ್ಕೆ ನಿಮ್ನೀಕರಿಸಿದ ಸರ್ಕಾರದ ಅಪರ ಕಾರ್ಯದರ್ಶಿ (ಅಭಿಪ್ರಾಯ) ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪ್ರತಿ ನಿಯೋಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.159

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

### ಅಧಿಸೂಚನೆ ಸಂಖ್ಯೆ: ಸಿಆಸುಇ 249 ಆಸೇವ 2004 ಬೆಂಗಳೂರು, ದಿನಾಂಕ: 13ನೇ ಜನವರಿ 2005

ಉಪಕಾರ್ಯದರ್ಶಿ-4 ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಬೆಂಗಳೂರು ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕೆ.ಎ.ಎಸ್.(ಕಿರಿಯ ಶ್ರೇಣಿ) ಅಧಿಕಾರಿ, ಶ್ರೀ ಎಂ. ಆರ್. ಸೋಮಶೇಖರಪ್ಪ, ಇವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯಿಂದ ಹಿಂದಕ್ಕೆ ಪಡೆದು ಆಹಾರ ಮತ್ತು ನಾಗರೀಕ ಪೂರೈಕೆ ಸಚಿವರ ಆಪ್ತಕಾರ್ಯದರ್ಶಿಯಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಥವಾ ಸಚಿವರ ಪದಾವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವರ್ಗಾಯಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.160

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

### ಅಧಿಸೂಚನೆ ಸಂಖ್ಯೆ: ಸಿಆಸುಇ 5 ಆಸೇವ 2005 ಬೆಂಗಳೂರು, ದಿನಾಂಕ: 28ನೇ ಜನವರಿ 2005

ಕರ್ನಾಟಕ ಆಡಳಿತ ಸೇವೆಯ (ಹಿರಿಯ ಶ್ರೇಣಿ) ವೃಂದಕ್ಕೆ ಸೇರಿದ ಶ್ರೀ ಎಂ. ಎನ್. ವಿಶ್ವನಾಥಯ್ಯ ಮುಖ್ಯ ಯೋಜನಾಧಿಕಾರಿ, ಜಿಲ್ಲಾ ಪಂಚಾಯತ್ ಶಿವಮೊಗ್ಗ ಇವರ ಸೇವೆಯನ್ನು ಯೋಜನಾ ಇಲಾಖೆಯಿಂದ ಹಿಂದಕ್ಕೆ ಪಡೆದು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ಮುಖ್ಯ ಆಡಳಿತಾಧಿಕಾರಿ ಶ್ರೀ ಜಯದೇವ ಹೃದ್ರೋಗ ಸಂಸ್ಥೆ ಬೆಂಗಳೂರು ಖಾಲಿ ಹುದ್ದೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.161

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಆಕುಕ 353 ಎಂಎಂಸಿ 2004 ಬೆಂಗಳೂರು, ದಿನಾಂಕ: 28ನೇ ಜನವರಿ 2005

ಬಳ್ಳಾರಿಯ ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ನಿಯೋಜನೆ ಮೇಲೆ ನೇತ್ರ ಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರಾಗಿರುವ ಡಾ: ಹೆಚ್. ಎಸ್. ನೀಲಕಂಠಸ್ವಾಮಿ ರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 285 (1) (ಎ) ಮತ್ತು (2)ನೇ ನಿಯಮದಡಿ ದಿನಾಂಕ: 31.01.2005ರ ಅಪರಾಹ್ನದಿಂದ ಜಾರಿಗೆ ಬರುವಂತೆ ಸೇವೆಯಿಂದ ಸ್ವಇಚ್ಛಾ ನಿವೃತ್ತರಾಗಲು ಅನುಮತಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.162

**ಎಸ್. ನಾಗರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಆನಾಸ 03 ಆಇಸೇ 2005 ಬೆಂಗಳೂರು, ದಿನಾಂಕ: 28ನೇ ಜನವರಿ 2005

ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಈ ಮುಂದೆ ಕಾಣಿಸಿದ ಅಧಿಕಾರಿಗಳಿಗೆ ವಯೋನಿವೃತ್ತಿ ಮೇರೆಗೆ ಅವರ ಹೆಸರಿನ ಮುಂದೆ ಕಾಣಿಸಿದ ದಿನಾಂಕದಿಂದ ಸೇವೆಯಿಂದ ನಿವೃತ್ತರಾಗಲು ಅನುಮತಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ಪದನಾಮ | ಜನ್ಮ ದಿನಾಂಕ | 58 ವರ್ಷ ತಲುಪಿದ ದಿನಾಂಕ | ನಿವೃತ್ತರಾಗುವ ದಿನಾಂಕ |
|---|---|---|---|---|
| 1 | 2 | 3 | 4 | 5 |
| 1 | ಶ್ರೀ ಲಿಂಗೇಗೌಡ, ಸಹಾಯಕ ನಿರ್ದೇಶಕರು, ಉಪನಿರ್ದೇಶಕರ ಕಛೇರಿ, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಹಾಸನ ಜಿಲ್ಲೆ. | 10.4.1947 | 9.04.2005 | 30.04.2005 |
| 2 | ಶ್ರೀಮತಿ ಕೆ. ಲೀಲಮ್ಮ, ಸಹಾಯಕ ನಿರ್ದೇಶಕರು, ಉಪನಿರ್ದೇಶಕರ ಕಛೇರಿ, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಚಿಕ್ಕಮಗಳೂರು ಜಿಲ್ಲೆ. | 1.06.1947 | 31.05.2005 | 31.05.2005 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.163

**ಕೆ. ರಾಜೇಂದ್ರ**

ಪೀಠಾಧಿಕಾರಿ, ಆಹಾರ-1 ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಸಿಆಸುಇ 34 ಸೆಅಸೆ 2005 ಬೆಂಗಳೂರು, ದಿನಾಂಕ: 27ನೇ ಜನವರಿ 2005

ಶ್ರೀ ಎ.ಪಿ.ಜೋಷಿ, ಐ.ಎ.ಎಸ್., ವ್ಯವಸ್ಥಾಪಕ ನಿರ್ದೇಶಕರು, ಕೃಷ್ಣ ಭಾಗ್ಯ ಜಲ ನಿಗಮ ಲಿಮಿಟೆಡ್, ಬೆಂಗಳೂರು ರವರು ಹಾಗೂ ಅವರ ಕುಟುಂಬದ ಈ ಕೆಳಕಾಣಿಸಿದ ಸದಸ್ಯರಿಗೆ ಪ್ರಸಕ್ತ 2004-2005ರ ಬ್ಲಾಕ್ ಅವಧಿಯಲ್ಲಿ ಅವರ ಸ್ವಗ್ರಾಮವಾದ ಲಕ್ನೋಗೆ ಹೋಗಿ-ಬರಲು ಸ್ವಗ್ರಾಮ ಪ್ರಯಾಣ ರಿಯಾಯಿತಿಯನ್ನು ಉಪಯೋಗಿಸಿಕೊಳ್ಳಲು ಅನುಮತಿ ನೀಡಲಾಗಿದೆ. ಅಧಿಕಾರಿಯವರು ಸಕ್ಷಮ ಪ್ರಾಧಿಕಾರದಿಂದ ಸಾಂದರ್ಭಿಕ ರಜೆಯನ್ನು ಮಂಜೂರು ಮಾಡಿಸಿಕೊಳ್ಳತಕ್ಕದ್ದು.

| ಕ್ರಮ ಸಂಖ್ಯೆ | ಹೆಸರು | ಸಂಬಂಧ | ವಯಸ್ಸು |
|---|---|---|---|
| 01 | ಶ್ರೀ ಎ. ಪಿ. ಜೋಷಿ | ಸ್ವತ: | 51 ವರ್ಷಗಳು |
| 02 | ಶ್ರೀಮತಿ ದೀಪಾ ಜೋಷಿ | ಪತ್ನಿ | 50 ವರ್ಷಗಳು |
| 03 | ಶ್ರೀ ಅನುಪಮ್ ಜೋಷಿ | ಮಗ | 26 ವರ್ಷಗಳು |
| 04 | ಕುಮಾರಿ ಅರ್ಷಿತಾ ಜೋಷಿ | ಮಗಳು | 21 ವರ್ಷಗಳು |

ಸದರಿ ಉದ್ದೇಶಕ್ಕಾಗಿ ತಗಲುವ ವಾಸ್ತವಿಕ ಪ್ರಯಾಣ ವೆಚ್ಚದ ಶೇಕಡ 90ರಷ್ಟು ಅಂತಿಮ ಪ್ರಯಾಣ ಭತ್ಯೆ ಬಿಲ್ಲಿನಲ್ಲಿ ಹೊಂದಾಣಿಕೆ ಮಾಡುವ ಷರತ್ತಿಗೆ ಒಳಪಟ್ಟು ಮುಂಗಡ ಪ್ರಯಾಣ ಭತ್ಯೆಯನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.164

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-1).

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

### ಅಧಿಸೂಚನೆ ಸಂಖ್ಯೆ ಅಪಜೀ 25 ಇಎನ್‌ವಿ 2004 ಬೆಂಗಳೂರು, ದಿನಾಂಕ: 27ನೇ ಜನವರಿ 2005

ಸರ್ಕಾರದ ಅಧಿಸೂಚನೆ ಸಂಖ್ಯೆ: ಅಪಜೀ 183 ಅಅಸೇ 2004, ದಿನಾಂಕ: 13.01.2005ರಲ್ಲಿ ಶ್ರೀ ಆನಂದ್ ಕೆ. ಎಸ್. ಉಪ ಅರಣ್ಯ ಸಂರಕ್ಷಣಾಧಿಕಾರಿ ಇವರನ್ನು ಕರ್ನಾಟಕ ಜೀವಿ ವೈವಿಧ್ಯ ಮಂಡಳಿ (Karnataka Bio-Diversity Board), ಬೆಂಗಳೂರು ಇಲ್ಲಿ ಶ್ರೀ ಎಂ. ಎಂ. ನಿಸ್ಸಾರ್ ರವರ ವಯೋನಿವೃತ್ತಿಯಿಂದ ತೆರವಾಗಿರುವ ರೀಡರ್/ ಅಸೋಸಿಯೇಟ್ ಪ್ರೊಫೆಸರ್ ಆಫ್ ಬಾಟನಿ ಹುದ್ದೆಗೆ ನಿಯೋಜಿಸಿದ್ದು ಅದರನುಸಾರ ಇವರನ್ನು ದಿನಾಂಕ: 20.01.2005 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ಜೀವಿ ವೈವಿಧ್ಯ ಮಂಡಳಿಯಲ್ಲಿನ ರೀಡರ್/ ಅಸೋಸಿಯೇಟ್ ಪ್ರೊಫೆಸರ್ ಬಾಟನಿ (ಸಸ್ಯಶಾಸ್ತ್ರ) ಹುದ್ದೆಗೆ ಮರು ಸ್ಥಳ ನಿಯುಕ್ತಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.165

**ಎನ್. ಆರ್. ಜಗನ್ನಾಥ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಸಿಆಸುಇ 27 ಸೆಅಸೆ 2005 ಬೆಂಗಳೂರು, ದಿನಾಂಕ: 25ನೇ ಜನವರಿ 2005

ಡಾ: ಕೆ.ಪಿ. ಕೃಷ್ಣನ್, ಐ.ಎ.ಎಸ್., ವ್ಯವಸ್ಥಾಪಕ ನಿರ್ದೇಶಕರು, ಕೆ.ಯು.ಐ.ಡಿ.ಎಫ್.ಸಿ ಬೆಂಗಳೂರು ಇವರಿಗೆ ದಿನಾಂಕ: 14.02.2005 ರಿಂದ 11.03.2005 ರವರೆವಿಗೆ (ಉದಿಸೇ) ಒಟ್ಟು 26 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ.

ಡಾ: ಕೆ. ಪಿ. ಕೃಷ್ಣನ್, ಐ.ಎ.ಎಸ್., ರವರು ರಜೆಯ ಮೇಲೆ ಹೋಗಿರದಿದ್ದರೆ, ವ್ಯವಸ್ಥಾಪಕ ನಿರ್ದೇಶಕರು, ಕೆ.ಯು.ಐ.ಡಿ.ಎಫ್.ಸಿ. ಬೆಂಗಳೂರು ಈ ಹುದ್ದೆಯಲ್ಲೇ ಸ್ಥಾನಪನ್ನರಾಗಿರುತ್ತಿದ್ದರೆಂದು ದೃಢೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.166 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-1).

**ಅಧಿಸೂಚನೆ ಸಂಖ್ಯೆ: ಸಿಆಸುಇ 388 ಸಆಸೇ 2004 ಬೆಂಗಳೂರು, ದಿನಾಂಕ: 29ನೇ ಜನವರಿ 2005**

ಶ್ರೀ ಜಿ. ಎನ್. ಹನುಮಂತಪ್ಪ, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಜಂಟಿ ನಿರ್ದೇಶಕರು, ಕರ್ನಾಟಕ ಹಾಲು ಒಕ್ಕೂಟ, ಬೆಂಗಳೂರು ಇವರನ್ನು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿ ಹುದ್ದೆಗೆ ನೇಮಿಸುವ ಸಲುವಾಗಿ ಇವರ ಸೇವೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆಯ ವಶಕ್ಕೆ ನೀಡಿರುವುದರಿಂದ ಸದರಿ ಅಧಿಕಾರಿಯವರನ್ನು ದಿನಾಂಕ: 20.12.2004 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಥವಾ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಚಿವರ ಪದಾವಧಿಯವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರಿಗೆ ಸಚಿವರ ಆಪ್ತ ಕಾರ್ಯದರ್ಶಿ ಹುದ್ದೆಯಲ್ಲಿ ಮರುಸ್ಥಳ ನಿಯುಕ್ತಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.167 **ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ವಾಕೈ 350 ರೇಸೇವಿ 2004 ಬೆಂಗಳೂರು, ದಿನಾಂಕ: 25ನೇ ಜನವರಿ 2005**

ಶ್ರೀ ಕೆ. ಎನ್. ಕೃಷ್ಣಪ್ಪ, ರೇಷ್ಮೆ ವಿಸ್ತರಣಾಧಿಕಾರಿ, ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿ, ತಳಗವಾರ, ರೇಷ್ಮೆ ಇಲಾಖೆ ಇವರು ದಿನಾಂಕ: 31.01.2005 ರಂದು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 285 (1) (ಎ) ರನ್ವಯ ಸರ್ಕಾರಕ್ಕೆ ಇವರಿಂದ ಬಾಕಿ ಇದ್ದಲ್ಲಿ ಆ ಮೊತ್ತವನ್ನು ನಿವೃತ್ತಿ ಉಪಲಬ್ಧಗಳಲ್ಲಿ ಕಟಾಯಿಸುವ ಷರತ್ತಿಗೆ ಒಳಪಟ್ಟು, ಸ್ವಯಂ ನಿವೃತ್ತಿ ಹೊಂದಲು ಅನುಮತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.168 **ಬಿ. ದೇವಿಕ**

ಸರ್ಕಾರದ ಅಧೀನ ಕಾರ್ಯದರ್ಶಿ(ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಿಆಸುಇ 66 ಸೇಆಸೆ 2004 ಬೆಂಗಳೂರು, ದಿನಾಂಕ: 28ನೇ ಜನವರಿ 2005**

ಶ್ರೀ ಅಂಜುಮ್ ಪರ್ವೇಜ್, ಐಎಎಸ್, ಜಿಲ್ಲಾಧಿಕಾರಿ, ಗುಲ್ಬರ್ಗಾ ರವರ ಆಸ್ಟ್ರೇಲಿಯಾ ವಿದೇಶ ನಿಯೋಜನೆಯ ಅವಧಿಯಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರನ್ನು ಜಿಲ್ಲಾಧಿಕಾರಿ, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ಈ ಹುದ್ದೆಯ ಸಮವರ್ತಿತ ಪ್ರಭಾರದಲ್ಲಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.169 **ಎಸ್. ಸೆಲ್ವಕುಮಾರ್**

ಸರ್ಕಾರದ ಉಪ ಕಾರ್ಯದರ್ಶಿ, ಸಿಆಸುಇ (ಸೇವೆಗಳು).

**ಅಧಿಸೂಚನೆ ಸಂಖ್ಯೆ: ಸಿಆಸುಇ 33 ಸಆಸೇ 2005 ಬೆಂಗಳೂರು, ದಿನಾಂಕ: 29ನೇ ಜನವರಿ 2005**

ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗೆ ಸೇರಿದ ಶ್ರೀ ಹೆಚ್. ಎನ್. ಪ್ರಸಾದ್ ಸರ್ಕಾರದ ಅಧೀನ ಕಾರ್ಯದರ್ಶಿ, ಮುಖ್ಯ ಮಂತ್ರಿಗಳ ಸಚಿವಾಲಯ ಇವರನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ಖಾಲಿ ಇರುವ ಉಪ ಕಾರ್ಯದರ್ಶಿ ಹುದ್ದೆಯಲ್ಲಿ ನೇಮಿಸುವ ಸಲುವಾಗಿ ಇವರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.170 **ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ಅಧಿಸೂಚನೆ ಸಂಖ್ಯೆ: ಸಿಆಸುಇ 23 ಆಸೇನಿ 2004 ಬೆಂಗಳೂರು, ದಿನಾಂಕ: 27ನೇ ಜನವರಿ 2005**

ಶ್ರೀ ಜಿ. ಮಹಮದ್ ಜಫ್ರುಲ್ಲಾ, ಕೆ.ಎ.ಎಸ್ (ಕಿ.ಶ್ರೇ) ಅಧಿಕಾರಿ ಇವರು ದಿನಾಂಕ: 5.01.07-2004ರಂದು ಸೇವೆಯಲ್ಲಿರುವಾಗಲೇ ನಿಧನ ಹೊಂದಿದ್ದು ಆ ದಿನಾಂಕದವರೆಗೆ ಅವರ ಹಕ್ಕಿನಲ್ಲಿರುವ ಗಳಿಕೆ ರಜೆಯನ್ನು ಸರ್ಕಾರಿ ಸುತ್ತೋಲೆ ಸಂಖ್ಯೆ: ಆಇ 20 ಎಸ್‌ಆರ್‌ಎಸ್ 97 ದಿನಾಂಕ: 20.09.1999 ರನ್ವಯ ಗರಿಷ್ಟ 240 ದಿನಗಳ ಮಿತಿಗೊಳಪಟ್ಟು ಕರ್ನಾಟಕ ನಾಗರೀಕ ಸೇವಾ ನಿಯಮ 118 (ಎ) (1)ರನ್ವಯ ಹಾಗೂ ಉಪನಿಯಮ (2)ರ ಷರತ್ತುಗಳಿಗೊಳಪಟ್ಟು ನಗಧೀಕರಿಸಲು ಮಂಜೂರು ನೀಡಿದೆ.

ಈ ಗಳಿಕೆ ರಜೆ ನಗಧೀಕರಣದ ಮೊತ್ತವನ್ನು ದಿವಂಗತ ಅಧಿಕಾರಿಯ ಹಕ್ಕುದಾರರಾದ ಅವರ ಪತ್ನಿ ಶ್ರೀಮತಿ ಡಿ. ನೂರ್‌ಜಹಾನ್ ಇವರಿಗೆ ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.171 **ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).